# ಕರ್ನಾಟಕ ವಿಧಾನ ಪರಿಷತ್ತು

1. ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 2187
2. ಸದಸ್ಯರ ಹೆಸರು : ಶ್ರೀ ಕೆ. ಪ್ರತಾಪಚಂದ್ರ ಶೆಟ್ಟಿ (ಸ್ಥಳೀಯ ಸಂಸ್ಥೆಗಳ ಕ್ಷೇತ್ರ)
3. ಉತ್ತರಿಸಬೇಕಾದ ದಿನಾಂಕ : 25.03.2021
4. ಉತ್ತರಿಸುವ ಸಚಿವರು : ಮುಖ್ಯ ಮಂತ್ರಿ

| ಕ್ರ.ಸಂ. | ಪ್ರಶ್ನೆ | ಉತ್ತರ |
|---|---|---|
| (ಅ) | ರಾಜ್ಯಕ್ಕೊಂದು ಸಿಬಂದಿ ಆಡಳಿತ ಸುಧಾರಣೆ ನಿಯಮಗಳು ಜಾರಿಯಲ್ಲಿವೆಯೇ; ಇಲ್ಲವಾದಲ್ಲಿ, ಕಾರಣವೇನು; | ರಾಜ್ಯ ನಾಗರಿಕ ಸೇವೆಗಳಿಗೆ ಒಳಪಡುವ (Civil Service) ಸರ್ಕಾರಿ ನೌಕರರ ಸೇವಾ ಷರತ್ತುಗಳಿಗೆ ಸಂಬಂಧಿಸಿದಂತೆ ಸಿಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆಯಿಂದ ನಿಯಮಗಳನ್ನು ರಚಿಸಲಾಗುತ್ತದೆ. ಈ ನಿಯಮಗಳನ್ನು ಕರ್ನಾಟಕ ರಾಜ್ಯ ಸಿವಿಲ್ ಸೇವಾ ಅಧಿನಿಯಮ 1978ರಡಿ ರಾಜ್ಯ ಸರ್ಕಾರವು ರಚಿಸುತ್ತದೆ. ವಿವಿಧ ಸೇವಾ ಷರತ್ತುಗಳಿಗೆ ಸಂಬಂಧಿಸಿದಂತೆ ಅಂತಹ ಹಲವಾರು ನಿಯಮಗಳು ಜಾರಿಯಲ್ಲಿರುತ್ತವೆ. |
| ಆ) | ರಾಜ್ಯದಲ್ಲಿ ನಿರ್ಮಿತಿ ಕೇಂದ್ರ ಕೆ.ಆರ್.ಐ.ಡಿ.ಎಲ್ ಗಳಂತೆ ಸಿಬಂದಿ ಆಡಳಿತ ಸುಧಾರಣೆ ಇಲಾಖೆಯ ವ್ಯಾಪ್ತಿಗೆ ಒಳಪಡದ ಸರ್ಕಾರದ ಅಧೀನ ಇಲಾಖೆ ಮತ್ತು ಸಂಸ್ಥೆಗಳು ಯಾವುವು; ಅವುಗಳು ಇಲಾಖೆ ವ್ಯಾಪ್ತಿಗೆ ಒಳಪಡದಿರಲು ಕಾರಣವೇನು; | ಸಿಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆಯಿಂದ ಸರ್ಕಾರಿ ನೌಕರರ ಸೇವಾ ಷರತ್ತುಗಳಿಗೆ ಸಂಬಂಧಿಸಿದಂತೆ ರಚಿಸಲಾದ ನಿಯಮಗಳು ಎಲ್ಲಾ ಸರ್ಕಾರಿ ಇಲಾಖೆಗಳ ನೌಕರರಿಗೆ ಅನ್ವಯವಾಗುತ್ತವೆ. ಆದರೆ, ಸರ್ಕಾರಿ ಅಂಗ ಸಂಸ್ಥೆಗಳು ಹಾಗೂ ಅರೆ ಸರ್ಕಾರಿ ಸಂಸ್ಥೆಗಳಿಗೆ ಈ ನಿಯಮಗಳು ನೇರವಾಗಿ ಅನ್ವಯವಾಗುವುದಿಲ್ಲ. ಅಂತಹ ಸಂಸ್ಥೆಗಳು ಸರ್ಕಾರದ ಕಾರ್ಯನೀತಿಗೆ ಅನುಗುಣವಾಗಿ ತಮ್ಮದೇ ಆದ ನಿಯಮಗಳನ್ನು ರಚಿಸಿಕೊಳ್ಳಬೇಕಾಗುತ್ತದೆ.<br><br>ಸಿಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆಯು ಸಚಿವಾಲಯ ಮಟ್ಟದ ಒಂದು ಇಲಾಖೆಯಾಗಿರುತ್ತದೆ. ನಿರ್ಮಿತಿ ಕೇಂದ್ರ ಕೆ.ಆರ್.ಐ.ಡಿ.ಎಲ್ ನಂತಹ ಸಂಸ್ಥೆಗಳು ಈ ಇಲಾಖೆಯ ಆಡಳಿತ ನಿಯಂತ್ರಣಕ್ಕೆ ಒಳಪಡುವುದಿಲ್ಲ. ಅಂತಹ ಸಂಸ್ಥೆಗಳು ಸಚಿವಾಲಯದಲ್ಲಿನ ಸಂಬಂಧಪಟ್ಟ ಇಲಾಖೆಯ ವ್ಯಾಪ್ತಿಗೆ ಒಳಪಡುತ್ತವೆ. |
| ಇ) | ಸರ್ಕಾರದ ಅಧೀನದ ಬೇರೆ ಬೇರೆ ಸಂಸ್ಥೆ/ಇಲಾಖೆಗಳು ಸಿಬಂದಿ ಮತ್ತು ಆಡಳಿತ ಸುಧಾರಣಾ ಇಲಾಖೆಯ ನೀತಿ ನಿಯಮಾವಳಿಗೆ ಒಳಪಡದೇ ಕಾರ್ಯನಿರ್ವಹಿಸುತ್ತಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; ಹೌದಾದಲ್ಲಿ, ಇದು ಸಾಮಾಜಿಕ ನ್ಯಾಯಕ್ಕೆ ವಿರುದ್ಧವಾಗಿರುವುದನ್ನು ಗಮನಿಸಲಾಗಿದೆಯೇ? | ಇಲ್ಲ |

ಸಂಖ್ಯೆ: ಸಿಆಸುಇ 05 ಎಆರ್‌ಬಿ 2021

(ಬಿ.ಎಸ್.ಯಡಿಯೂರಪ್ಪ)
ಮುಖ್ಯ ಮಂತ್ರಿ